CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೦೫ (ಭಾದ್ರಪದ ೨೪ ಶಕ ವರ್ಷ ೧೯೨೭) | ಸಂಚಿಕೆ ೩೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ನಂ. 49, 1ನೇ ಮಹಡಿ, ಸೌತ್‌ಬ್ಲಾಕ್ ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-560 001**

**ಪ್ರಕಟಣೆ ಅಧಿಸೂಚನೆ ಸಂಖ್ಯೆ: ಆಡಳಿತ:ಸಿಬ್ಬಂದಿ:ಇ5:98/2005-06 ದಿನಾಂಕ: 2ನೇ ಆಗಸ್ಟ್ 2005**

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಪರಿಶಿಷ್ಟ ಜಾತಿಯ ವರ್ಗಕ್ಕೆ ಸೇರಿದ 2 ವಾಹನ ಚಾಲಕರ ಹುದ್ದೆಗಳನ್ನು ಬ್ಯಾಕ್‌ಲಾಗ್ ಎಂದು ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಗುರುತಿಸಿದ್ದು, ಇಲಾಖೆಯ ಅಧಿಸೂಚನೆ ಸಂಖ್ಯೆ: ಆಡಳಿತ/ ಸಿಬ್ಬಂದಿ/ಇ5:12:2005-06 ದಿನಾಂಕ: 19.4.2005 ರಲ್ಲಿ ಸದರಿ ಹುದ್ದೆಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿಯ ಒಂದು ಸಾಮಾನ್ಯ ಅಭ್ಯರ್ಥಿಯಿಂದ ಹಾಗೂ ಒಂದು ಮಹಿಳಾ ಅಭ್ಯರ್ಥಿಯಿಂದ ತುಂಬಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ, ಸ್ವೀಕೃತಿಯಾದ ಅರ್ಜಿಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ: 2001 ದಿನಾಂಕ: 21.11.2001 ರಂತೆ ಪರಿಶೀಲಿಸಿ ಆಯ್ಕೆಪಟ್ಟಿ ಮತ್ತು ಕಾಯ್ದಿರಿಸಿದ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆವಿ 2000 ದಿನಾಂಕ: 22.11.2002 ರಂತೆ ರೋಸ್ಟರ್ ಬಿಂದುವಿನಂತೆ, ಇಲಾಖೆಯಲ್ಲಿ ಗುರುತಿಸಲಾದ 2 ಬ್ಯಾಕ್‌ಲಾಗ್ ವಾಹನ ಚಾಲಕರ ಹುದ್ದೆಯನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡಿರುವ ಪಟ್ಟಿಯ ವಿವರ.

**ಆಯ್ಕೆಪಟ್ಟಿ**

| ಕ್ರಮ ಸಂಖ್ಯೆ | ರೋಸ್ಟರ್ ಬಿಂದು | ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ | ಶೇಕಡವಾರು |
|---|---|---|---|---|---|
| 1 | ಪರಿಶಿಷ್ಟ ಜಾತಿ (ಸಾಮಾನ್ಯ ಅಭ್ಯರ್ಥಿ) | ಶ್ರೀ ಎಂ. ಜಿ. ಕುಬೇರಪ್ಪ, ಬಿನ್ ಜಿ. ಮರಿಯಪ್ಪ, ಹಿರೇಚೌಟಿ, ಎಣ್ಣೆಕೊಪ್ಪ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | 13.7.67 | 7ನೇ ತರಗತಿ | 98.2 |
| 2 | ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ) | ಶ್ರೀಮತಿ ಪಾರ್ವತಿ, ಕೋಂ ಸಂಗಶೆಟ್ಟಿ ಬಾವಿದೊಡ್ಡೆ ಮು.ಪೊ. ಮುಚಳಂಬ, ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ. | 28.8.71 | 7ನೇ ತರಗತಿ | 64.0 |

ಆ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2000 ದಿನಾಂಕ: 22.11.2002 ರಂತೆ ರೋಸ್ಟರ್ ಬಿಂದುವಿನಂತೆ, ಇಲಾಖೆಯಲ್ಲಿ ಗುರುತಿಸಲಾದ 2 ವಾಹನ ಚಾಲಕರ ಬ್ಯಾಕ್‌ಲಾಗ್ ಹುದ್ದೆಯನ್ನು ಮೆರಿಟ್ ಆಧಾರದ ಮೇಲೆ ಆಯ್ಕೆಯಲ್ಲಿ ಕಾಯ್ದಿರಿಸಿರುವ ಪಟ್ಟಿಯ ವಿವರ.

**ಕಾಯ್ದಿರಿಸಿದ ಪಟ್ಟಿ**

| ಕ್ರಮ ಸಂಖ್ಯೆ | ರೋಸ್ಟರ್ ಬಿಂದು | ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ | ಶೇಕಡ ವಾರು |
|---|---|---|---|---|---|
| 1 | ಪರಿಶಿಷ್ಟ ಜಾತಿ (ಸಾಮಾನ್ಯ ಅಭ್ಯರ್ಥಿ) | ಶ್ರೀ ವಿ. ಶ್ರೀನಿವಾಸ, ಬಿನ್ ಲೇಟ್ ವೆಂಕಟಯ್ಯ, 2833, ಶ್ರೀ ಲಾವಣ್ಯ ಎಸ್.ಟಿ.ಡಿ. ಬೂತ್ ಎನ್.ಇ.ಎಸ್. ಬಡಾವಣೆ ಗಾಂಧಿನಗರ, ಮಾಗಡಿ ಟೌನ್, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-562120. | 21.9.71 | 7ನೇ ತರಗತಿ | 97.8 |
| 2 | ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ) | ಶ್ರೀಮತಿ ಸಂತೋಷಮ್ಮ, C/o ಶಿವರಾಂ ಚವ್ಹಾಣ್, ಪ್ಲಾಟ್ ನಂ.119, ಸೈಟ್ ನಂ.17, ಪಾರ್ಟ್ 2, ಜಾದವ ಲೇಔಟ್, ಬಿದ್ದಾಪೂರ ಕಾಲೋನಿ, ಗುಲ್ಬರ್ಗ. | 1.6.75 | 7ನೇ ತರಗತಿ | 52.3 |

ಈ ಬಗ್ಗೆ ಆಕ್ಷೇಪಣೆಗಳಿದ್ದಲ್ಲಿ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಅಧಿಕ ನಿರ್ದೇಶಕರು (ಆಡಳಿತ), ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ಬೆಂಗಳೂರು, 49, ಖನಿಜ ಭವನ, ಡಿ.ದೇವರಾಜ್ ಅರಸು ರಸ್ತೆ, ಬೆಂಗಳೂರು-560 001 ರವರಿಗೆ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಅಭ್ಯರ್ಥಿಯ ನೇಮಕಾತಿಯು ಮೇಲಿನ ಷರತ್ತುಗಳು ಮತ್ತು ಅವರು ಆಯ್ಕೆ ಹೊಂದಿದ ನಂತರ ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಮೂಲ ಅಂಕ ಪಟ್ಟಿಗಳು, ಜಾತಿ ಪ್ರಮಾಣ ಪತ್ರ ಮತ್ತು ಇತರ ಮೂಲ ದಾಖಲಾತಿಗಳನ್ನು ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಮೇಲ್ಕಂಡ ಷರತ್ತಿಗೊಳಪಟ್ಟಂತೆ ಆಯ್ಕೆಪಟ್ಟಿ ಹಾಗೂ ಕಾಯ್ದಿರಿಸಿದ ಪಟ್ಟಿಯಲ್ಲಿನ ಅಭ್ಯರ್ಥಿಗಳು ನೇಮಕಾತಿಯನ್ನು ಹಕ್ಕೆಂದು ಪರಿಗಣಿಸುವಂತಿಲ್ಲ.

ಅಧಿಕ ನಿರ್ದೇಶಕರು (ಆಡಳಿತ),
ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು.

ಪಿ.ಆರ್.507

**IN THE COURT OF THE IV ADDL. CITY CIVIL JUDGE, MAYOHALL, BANGALORE**
**P & S.C.No. 15039/2005**
**In the matter of Will of Dr. C.S. Pichamuthu**

**Petitioner :** 1. Dr. P. N. Shankar, aged 60 yrs., Scientist, National Aeronautical Laboratory, Bangalore-17.

**V/s**

**Respondent :** Nil

**Public Notice**

Notice is hereby given that a petition have been made to this court under Sec 272, 273 and 276 of the Indian Succession Act, for grant of Probate in respect of the immovable property i.e., house premises bearing No.1. D' Souza Road, Bangalore-25.

Be it known that No caveat has been entered and the said case is posted for hearing on 22.10.05. All persons claiming to have any interest in the estate of the deceased may come and see the proceeding before the grant of Probate.

Given under my hand and the seal of the Court, this the 9th day of September, 2005.

By Order of the Court,
Asst Registrar,
City Civil Court, Mayohall Unit, Bangalore.

PD-97

**FORM-IV**
**(See Rules 12)**
**NOTICE**

It is hereby noticed that the undersigned has change her name from smt **LEELAVATI MAHARUDRA BADIGEAR** to Smt **SUDHA UDAYA KULKARNI**

PD-96 **SUDHA UDAYA KULKARNI**

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು, ಉಡುಪಿ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಡುಪಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: EST:97:2001-02 ದಿನಾಂಕ: 17.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST:1:273:2001-02 ದಿನಾಂಕ: 1.08.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: EST:1:273:2001-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST:1:273:2001-02 ದಿನಾಂಕ: 14.12.2004.
6. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:48/04-05, ದಿನಾಂಕ: 30.12.2004.
7. ಈ ಕಛೇರಿಯ ರದ್ದತಿ ಆದೇಶ ಸಂಖ್ಯೆ: EST:48: 04-05 ದಿನಾಂಕ: 25.02.2005.

8. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ರೀ-ಅಲಾಟ್‌ಮೆಂಟ್ ಆರ್ಡರ್ ಸಂಖ್ಯೆ: EST:1:273:2001-02 ದಿನಾಂಕ: 6.8.2005.

**ಪ್ರಸ್ತಾವನೆ:**

ಈ ಇಲಾಖೆಯ ಉಡುಪಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ. ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಉಡುಪಿ ಜಿಲ್ಲೆ | ಎರಡು | ಒಂದು | ಮೂರು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಯನ್ನು ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್‌ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಉಪ ನೋಂದಣಿ ಕಛೇರಿ, ಕಾರ್ಕಳ ಇಲ್ಲಿಗೆ ಉಲ್ಲೇಖ (6)ರ ಈ ಕಛೇರಿಯ ನೇಮಕಾತಿ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ್ದು, ಸದರಿ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (6)ರ ನೇಮಕಾತಿ ಆದೇಶವನ್ನು ದಿನಾಂಕ: 4.01.2005 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್ ವರೆವಿಗೂ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಉಲ್ಲೇಖ (6) ರನ್ವಯ ಈ ಕಛೇರಿಯಿಂದ ಇವರಿಗೆ ನೀಡಿದ ನೇಮಕಾತಿ ಆದೇಶವನ್ನು ಉಲ್ಲೇಖ (7)ರನ್ವಯ ಈ ಕಛೇರಿಯಿಂದ ರದ್ದುಪಡಿಸಲಾಯಿತು. ಹಾಗೂ ಈ ವಿಷಯವನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರು, ಬೆಂಗಳೂರು ಇವರಿಗೂ ಹಾಗೂ ಸದರಿ ಅಭ್ಯರ್ಥಿಗೂ ತಿಳಿಸಲಾಯಿತು. ಉಲ್ಲೇಖ (7)ರ ಈ ಕಛೇರಿಯ ರದ್ದತಿ ಆದೇಶವನ್ನು ಕೆಳಕಂಡ ಅಭ್ಯರ್ಥಿಯು ದಿನಾಂಕ: 11.03.2005 ರಂದು ಪಡೆದಿರುತ್ತಾರೆ.

| | | |
|---|---|---|
| 1. | ಲಕ್ಷ್ಮಣ ಭೀಮಣ್ಣ ಕಟ್ಟೀಮನಿ ಮುಕ್ಕಾಂ: ಇಂಗಳಗಿ ತಾಲ್ಲೂಕ್: ಇಂಡಿ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯ ಪಟ್ಟಿ |

ಈ ರೀತಿ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯು ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಹಾಗೂ ಮೇಲ್ಕಂಡ ಅಭ್ಯರ್ಥಿಯು ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗದ ಕಾರಣ ಸದರಿಯವರ ಬದಲಿಗೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (8)ರ ಅವರ ರೀ-ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ:48:04-05 ದಿನಾಂಕ: 23ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (8)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ.ತಿಂ.ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1. | ಹೆಚ್. ರಾಮಚಂದ್ರ S/o ರಾಮಣ್ಣ C/o ಜಯಮ್ಮ ಹುಲಿಗೌಡ ನರೀಗುಡ್ಡನಹಳ್ಳಿ ಜ್ಯೋತಿನಗರ ಅಂಚೆ ಚಿಕ್ಕಮಗಳೂರು-577 102 | SC | 30.06.1971 | 31.02.07 | S.S.L.C 71.500 | ಉಪ ನೋಂದಣಿ ಕಛೇರಿ, ಕಾರ್ಕಳ ಉಡುಪಿ ಜಿಲ್ಲೆ. | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಹೆಚ್ಚುವರಿ ಪಟ್ಟಿ. |

S.S.L.C ಅಂಕಪಟ್ಟಿಯ ನೋಂದಣಿ ಸಂಖ್ಯೆ: 109472/April 1987(ವರ್ಷ)ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 30.06.1971 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ Establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಪಡಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.508

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

### ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬಾಗಲಕೋಟೆ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ:ಸಿಆರ್:38:2001-02 ದಿನಾಂಕ: 23.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST:1:273:2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: EST:1:273:2001-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST:1:273:2001-02 ದಿನಾಂಕ: 14.12.2004.
6. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:37/04-05, ದಿನಾಂಕ: 05.01.2005.
7. ಈ ಕಛೇರಿಯ ರದ್ದತಿ ಆದೇಶ ಸಂಖ್ಯೆ: EST:37: 04-05 ದಿನಾಂಕ: 03.03.2005.
8. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ರೀ-ಅಲಾಟ್‌ಮೆಂಟ್ ಆರ್ಡರ್ ಸಂಖ್ಯೆ: EST:1:273:2001-02 ದಿನಾಂಕ: 6.8.2005.

**ಪ್ರಸ್ತಾವನೆ:**

ಈ ಇಲಾಖೆಯ ಬಾಗಲಕೋಟೆ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ. ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಬಾಗಲಕೋಟೆ ಜಿಲ್ಲೆ | ಒಂದು | ಇಲ್ಲ | ಒಂದು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಯನ್ನು

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್‌ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಉಪ ನೋಂದಣಿ ಕಛೇರಿ, ಬೀಳಗಿ ಇಲ್ಲಿಗೆ ಉಲ್ಲೇಖ (6)ರ ಈ ಕಛೇರಿಯ ನೇಮಕಾತಿ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ್ದು, ಸದರಿ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (6)ರ ನೇಮಕಾತಿ ಆದೇಶವನ್ನು ದಿನಾಂಕ: 7.01.2005 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್ ವರೆವಿಗೂ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಉಲ್ಲೇಖ (6) ರನ್ವಯ ಈ ಕಛೇರಿಯಿಂದ ಇವರಿಗೆ ನೀಡಿದ ನೇಮಕಾತಿ ಆದೇಶವನ್ನು ಉಲ್ಲೇಖ (7)ರನ್ವಯ ಈ ಕಛೇರಿಯಿಂದ ರದ್ದುಪಡಿಸಲಾಯಿತು. ಹಾಗೂ ಈ ವಿಷಯವನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರು, ಬೆಂಗಳೂರು ಇವರಿಗೂ ಹಾಗೂ ಸದರಿ ಅಭ್ಯರ್ಥಿಗೂ ತಿಳಿಸಲಾಯಿತು. ಉಲ್ಲೇಖ (7)ರ ಈ ಕಛೇರಿಯ ರದ್ದತಿ ಆದೇಶವನ್ನು ಕೆಳಕಂಡ ಅಭ್ಯರ್ಥಿಯು ದಿನಾಂಕ: 04.03.2005 ರಂದು ಪಡೆದಿರುತ್ತಾರೆ.

| | | |
|---|---|---|
| 1. | ಪದ್ಮಾವತಿ ವೆಂಕಪ್ಪ ಜಮಾದಾರ್ ಹೂಡಿ ಪ್ಲಾಟ್ ಮಹಾಲಿಂಗಪೂರ ತಾಲ್ಲೂಕ್ ಮುಧೋಳ | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ ಮುಖ್ಯ ಪಟ್ಟಿ |

ಈ ರೀತಿ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯು ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಹಾಗೂ ಮೇಲ್ಕಂಡ ಅಭ್ಯರ್ಥಿಯು ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗದ ಕಾರಣ ಸದರಿಯವರ ಬದಲಿಗೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (8)ರ ಅವರ ರೀ-ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ:ಜಪನಾ:15:05-06 ದಿನಾಂಕ: 22ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (8)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ.ತಿಂ.ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1. | ಜಯಲಕ್ಷ್ಮಿ ಪರಶುರಾಮ ನಾಯಕ್ W/o ಪರಶುರಾಮನಾಯಕ್ ಈದಗಾ LT No.3 ಪೋಸ್ಟ್ ಬಸವನ ಬಾಗೇವಾಡಿ ತಾಲ್ಲೂಕು: ಬಸವನ ಬಾಗೇವಾಡಿ ಜಿಲ್ಲೆ: ಬಿಜಾಪುರ. | SC | 20.07.1973 | 29.01.17 | S.S.L.C 70.667 | ಉಪ ನೋಂದಣಿ ಕಛೇರಿ, ಬೀಳಗಿ ಬಾಗಲಕೋಟೆ ಜಿಲ್ಲೆ. | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ. |

S.S.L.C ಅಂಕಪಟ್ಟಿಯ ನೋಂದಣಿ ಸಂಖ್ಯೆ: 147551/April 1989(ವರ್ಷ)ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 20.07.1973 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ Establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಪಡಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ಪಿ.ಆರ್.509 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ.

**ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1**
**ಮರು ಟೆಂಡರ್ ಪ್ರಕಟಣೆ ಸಂಖ್ಯೆ: ತೋಉನಿ:ಕಉ:ಬಿಜಿಟಿ:ವಿನಿ2:4:05-06 ದಿನಾಂಕ: 8ನೇ ಸೆಪ್ಟೆಂಬರ್ 2005**

**ವಿಷಯ :** ಕಬ್ಬನ್ ಉದ್ಯಾನವನದ ರಸ್ತೆಗಳಲ್ಲಿ ಕಸಕಡ್ಡಿ ಹಾಗೂ ಮರದ ಕೆಳಗೆ ಬಿದ್ದಿರುವ ಎಲೆಗಳು ಹಾಗೂ ಪ್ಲಾಸ್ಟಿಕ್ ಚೀಲ ಇತ್ಯಾದಿ ತ್ಯಾಜ್ಯ. ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವ ಬಗ್ಗೆ.

ಕಬ್ಬನ್ ಉದ್ಯಾನವನ ಹಾಗೂ ಸುತ್ತ ಮುತ್ತಲಿನ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಕಸ ಗುಡಿಸಿ ಸ್ವಚ್ಛತೆ ಮಾಡಿಸಲು 2005-06ನೇ ಸಾಲಿಗೆ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಇಚ್ಛಿಸುವವರು ಪ್ರತಿ ಮಾಹೆಗೆ ತಗಲುವ ವೆಚ್ಚದರ ಸೂಚಿಸಲು ತಿಳಿಸಿದೆ.

| ವಿವರಗಳು | ವಿಸ್ತೀರ್ಣ | ಮಾಹೆಯಾನ ದರ |
|---|---|---|
| ಕಬ್ಬನ್ ಉದ್ಯಾನವನದಲ್ಲಿ ಬರುವ ರಸ್ತೆಗಳು ಅನುಬಂಧ-1 ರಲ್ಲಿ ತಿಳಿಸಿರುವ ವಿವರಗಳಂತೆ ಕಸ ಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವುದು. ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಎಲೆ ಕಸ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ತೆಗೆಸುವುದು. | ಅನುಬಂಧ-1ರಲ್ಲಿ ನಮೂದಿಸಿದಂತೆ | |

1. ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ : 28.9.2005 ರಿಂದ 30.09.2005ರ ಸಂಜೆ 5.00 ಗಂಟೆಯವರೆಗೆ
2. ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ : 1.10.2005 ಸಂಜೆ 4.00 ಗಂಟೆಯವರೆಗೆ
3. ಟೆಂಡರ್‌ಗಳನ್ನು ತೆರೆಯುವ ದಿನಾಂಕ : 1.10.2005 ಸಂಜೆ 5.00 ಗಂಟೆಗೆ
4. ಟೆಂಡರ್ ಫಾರಂ ಬೆಲೆ : ರೂ.500.00 (ಐದು ನೂರು ಮಾತ್ರ)

ಹೆಚ್ಚಿನ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

**ನಿಬಂಧನೆ ಮತ್ತು ಷರತ್ತುಗಳು:**

1. ಟೆಂಡರ್ ಫಾರಂನ್ನು ದಿನಾಂಕ: 28.9.2005 ರಿಂದ 30.09.2005 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಫಾರಂ ಬೆಲೆ ರೂ.500-00
2. ಟೆಂಡರ್ ಜೊತೆಯಲ್ಲಿ ರೂ.50000-00 ಗಳ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಬೇಕು ಡಿಮ್ಯಾಂಡ್ ಡ್ರಾಫ್ಟ್‌ನ್ನು ತೋಟಗಾರಿಕೆ ನಿರ್ದೇಶಕರು, ಹಾಗೂ ಸದಸ್ಯ ಕಾರ್ಯದರ್ಶಿಗಳು ಬೆಂಗಳೂರು ಗಾರ್ಡನ್ ಟ್ರಸ್ಟ್, ಬೆಂಗಳೂರು ರವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು.
3. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 1.10.2005 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು ನಿಗದಿಯಾದ ವೇಳೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 1.10.2005 ರಂದು ಸಂಜೆ 5.00 ಗಂಟೆಗೆ ಕೆಳಸಹಿದಾರರ ಕಛೇರಿಯಲ್ಲಿ ಟೆಂಡರ್ ದಾರರ ಸಮ್ಮುಖದಲ್ಲಿ ತೆರೆಯಲಾಗುವುದು, ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣಅಧಿಕಾರವು ತೋಟಗಾರಿಕೆ ನಿರ್ದೇಶಕರದೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು.
5. ಟೆಂಡರ್‌ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು ಮತ್ತು ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಸ್ವಚ್ಛತೆ ಮಾಡಿಸುವ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.
6. ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ.50,000-00 ಗಳ ಡಿ.ಡಿ. ಇಲ್ಲದಿದ್ದಲ್ಲಿ ಅಂತಹಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಕಬ್ಬನ್ ಉದ್ಯಾನವನದ ಒಳಗಡೆ (ಅನುಬಂಧ-1 ರಲ್ಲಿ ಲಗತ್ತಿಸಿದ ವಿವರದ ರೀತಿ) ಇರುವ ರಸ್ತೆಗಳನ್ನು ಪ್ರತಿನಿತ್ಯ ಹೊರ ಮತ್ತು ಒಳಗೆ ಸ್ವಚ್ಛವಾಗಿ ಗುಡಿಸಬೇಕು ಇದಕ್ಕೆ ಕೆಲಸಗಾರರನ್ನು ನೇಮಕಾತಿ ಮಾಡಿದ ವಿವರಗಳನ್ನು ಸಂಬಂಧಿಸಿದ ಗುತ್ತಿಗೆದಾರರು ಸಹಾಯಕ ತೋಟಗಾರಿಕೆ ಅಧಿಕಾರಿ, ಕಬ್ಬನ್ ಉದ್ಯಾನವನ ಹಾಗೂ ಶೇಷಾದ್ರಿ ವಿಭಾಗ ರವರ ಪರಿಶೀಲನೆಗೆ ಒದಗಿಸಬೇಕು ಹಾಗೂ ಅವರಿಂದ ಪ್ರತಿ ತಿಂಗಳು ತೃಪ್ತೀಕರಣ ದೃಢೀಕರಣ ಪಡೆಯತಕ್ಕದ್ದು.
8. ಕಬ್ಬನ್ ಉದ್ಯಾನವನದಲ್ಲಿ ಬರುವ ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಹಾಗೂ ಅನುಬಂಧ-1 ರಲ್ಲಿ ವಿವರಿಸಿದ ರಸ್ತೆಗಳಲ್ಲಿ ಸ್ವಚ್ಛತೆ ಹಾಗೂ ಮರದ ಕೆಳಗೆ ಹಾಗೂ ಹುಲ್ಲುಹಾಸಿನ ಮೇಲೆ ಬಿದ್ದಿರುವ ಕಸ ಕಡ್ಡಿಗಳನ್ನು ನಿಗದಿಪಡಿಸಿದ ಕಾಂಪೋಸ್ಟ್ ಗುಂಡಿಗೆ ಸಾಗಿಸಬೇಕು ಹಾಗೂ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಸ್ವಂತ ವಾಹನದಲ್ಲಿ ದೂರ ಸಾಗಿಸಬೇಕು.
9. ಈ ಗುತ್ತಿಗೆ ಕೆಲಸವನ್ನು ನಿರ್ವಹಿಸಿದ 2 ವರ್ಷದ ಅವಧಿಗೆ ದೃಢೀಕರಣ ಪತ್ರವನ್ನು ನೀಡಬೇಕು.
10. ಯಶಸ್ವಿ ಟೆಂಡರ್‌ದಾರರು ಟ್ರಿಪರ್ ಲಾರಿ ಅಥವಾ ಟ್ರ್ಯಾಕ್ಟರ್ ಹೊಂದಿರತಕ್ಕದ್ದು ಮತ್ತು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಹೊಂದಿರತಕ್ಕದ್ದು.
11. ಕಳೆದ ಸಾಲಿನ ಆದಾಯದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
12. ಕನಿಷ್ಟ 5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಿರಬೇಕು.
13. ಯಶಸ್ವಿ ಟೆಂಡರ್‌ದಾರರು ವಾರ್ಷಿಕ ಗುತ್ತಿಗೆ ಕೆಲಸವನ್ನು ನಿರ್ವಹಿಸಲು ನಮೂದಿಸಿದ ಟೆಂಡರ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪ್ರತಿ ತಿಂಗಳು ಕೆಲಸ ತೃಪ್ತಿಕರವಾಗಿ ನಿರ್ವಹಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಹಾಗೂ ನಿಯಮದಂತೆ ಸಾಲದ ಬಿಲ್ಲಿನಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.
14. ಯಶಸ್ವಿ ಟೆಂಡರ್‌ದಾರರು ಗುತ್ತಿಗೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ಒಪ್ಪಿರುವ ಬಗ್ಗೆ ರೂ.200-00 ಛಾಪಾ ಕಾಗದದ ಮೇಲೆ ಕರಾರು ಬರೆದು ಕೊಡಬೇಕು.
15. ಈ ಕಛೇರಿಯಿಂದ ಸದರಿ ಗುತ್ತಿಗೆಯನ್ನು ನಿರ್ವಹಿಸಲು ಆದೇಶ ಪಡೆದ ದಿನಾಂಕ ನಿಗದಿತ ಅವಧಿಯ ನಂತರ ಯಾವುದೇ ಕಾರಣಕ್ಕೂ ಗುತ್ತಿಗೆಯ ಅವಧಿಯನ್ನು ಮುಂದುವರಿಸಲು ಸಾಧ್ಯವಿರುವುದಿಲ್ಲ.
16. ಸದರಿ ಗುತ್ತಿಗೆ ಕೆಲಸವನ್ನು ಕಳಪೆಯಾಗಿ ನಿರ್ವಹಣೆ ಮಾಡಿದಲ್ಲಿ ಗುತ್ತಿಗೆ ಕರಾರನ್ನು ರದ್ದುಪಡಿಸಿ, ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಹಾಗೂ ಕಾನೂನಿನಡಿಯಲ್ಲಿ ಕ್ರಮ ಜರುಗಿಸಿ ದಂಡ ವಿಧಿಸಲಾಗುತ್ತದೆ.
17. ಕೆಲಸ ತೃಪ್ತಿಕರವಾಗಿಲ್ಲದಿದ್ದಲ್ಲಿ ಗುತ್ತಿಗೆಯ ಅವಧಿಯನ್ನು ಯಾವುದೇ ಕಾರಣ ನೀಡದೇ ತೋಟಗಾರಿಕೆ ನಿರ್ದೇಶಕರು ರದ್ದುಪಡಿಸುವ ಅಧಿಕಾರ ಹೊಂದಿರುತ್ತಾರೆ.
18. ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಉಪ ನಿರ್ದೇಶಕರು, ತುರ್ತು ಸಂದರ್ಭದಲ್ಲಿ ಸ್ವಚ್ಛತೆ ಬಗ್ಗೆ ನೇಮಿಸುವ ಕೆಲಸವನ್ನು ಸಹ ನಿರ್ವಹಿಸುವುದು.
19. ಮಹಾನಗರ ಪಾಲಿಕೆಯಿಂದ ಸದರಿ ಸ್ವಚ್ಛತಾ ಕೆಲಸವನ್ನು ಪ್ರಾರಂಭ ಮಾಡಿದ ದಿನದಂದೇ ಆದೇಶವು ತಾನಾಗಿಯೇ ರದ್ದಾಗುತ್ತದೆ ಎಂದು ಭಾವಿಸತಕ್ಕದ್ದು.

ಪಿ.ಆರ್.510 ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು-1.